# ಕರ್ನಾಟಕ ಸರ್ಕಾರ

ಸಂಖ್ಯೆ: ಟಿಓಆರ್ 3702 ಟಿಡಿವಿ 2021

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸ ಸೌಧ,
ಬೆಂಗಳೂರು, ದಿನಾಂಕ:24-03-2021

06
Starred
25/03/2021

ಇವರಿಂದ,
ಸರ್ಕಾರದ ಕಾರ್ಯದರ್ಶಿ,
ಪ್ರವಾಸೋದ್ಯಮ ಇಲಾಖೆ
ವಿಕಾಸಸೌಧ, ಬೆಂಗಳೂರು,

ಇವರಿಗೆ,
ಕಾರ್ಯದರ್ಶಿಗಳು,
ಕರ್ನಾಟಕ ವಿಧಾನ ಸಭೆ ಸಚಿವಾಲಯ
ವಿಧಾನಸೌಧ, ಬೆಂಗಳೂರು.

ಮಾನ್ಯರೆ,

ವಿಷಯ: ಮಾನ್ಯ ವಿಧಾನ ಸಭೆ ಸದಸ್ಯರಾದ ಶ್ರೀ. ದೊಡ್ಡನಗೌಡ ಜಿ.ಪಾಟೀಲ್ (ಹುನಗುಂದ) ಇವರ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ: 3702 ಕ್ಕೆ ಉತ್ತರ ಒದಗಿಸುವ ಬಗ್ಗೆ.

*****

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಶ್ರೀ. ದೊಡ್ಡನಗೌಡ ಜಿ.ಪಾಟೀಲ್ (ಹುನಗುಂದ) ಇವರ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ: 3702 ಕ್ಕೆ ಉತ್ತರದ 25 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಕ್ರಮಕ್ಕಾಗಿ ಕಳುಹಿಸಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ವಿಶ್ವಾಸಿ,

24.03.2021

**(ಆರ್. ರಾಜಶೇಖರ್)**
ಸರ್ಕಾರದ ಅಧೀನ ಕಾರ್ಯದರ್ಶಿ
ಪ್ರವಾಸೋದ್ಯಮ ಇಲಾಖೆ

# ಕರ್ನಾಟಕ ವಿಧಾನಸಭೆ

**ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ** : 3702

**ಮಾನ್ಯ ಸದಸ್ಯರ ಹೆಸರು** : ಶ್ರೀ ದೊಡ್ಡನಗೌಡ ಜಿ. ಪಾಟೀಲ್ (ಹುನಗುಂದ)

**ಉತ್ತರಿಸುವ ಸಚಿವರು** : ಪ್ರವಾಸೋದ್ಯಮ, ಪರಿಸರ ಹಾಗೂ ಜೀವಿಶಾಸ್ತ್ರ ಸಚಿವರು

**ಉತ್ತರಿಸುವ ದಿನಾಂಕ** : 25-03-2021

*****

<table>
<tr><th>ಕ್ರ. ಸಂ.</th><th>ಪ್ರಶ್ನೆ</th><th>ಉತ್ತರ</th></tr>
<tr><td>ಅ)</td><td>ಹುನಗುಂದ ಕ್ಷೇತ್ರದಲ್ಲಿ ಪ್ರವಾಸೋದ್ಯಮ ಇಲಾಖೆಯ ಧಮ್ಮೂರು ಫಾಲ್ಸ್, ಸಿದ್ದನಕೊಳ್ಳ ಮತ್ತು ರಂಗಸಮುದ್ರ ಎಂಬ ಪ್ರವಾಸಿ ತಾಣಗಳು ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;</td><td rowspan="2">ರಾಜ್ಯದಲ್ಲಿ ಒಟ್ಟಾರೆ 778 ಪ್ರವಾಸಿ ತಾಣಗಳನ್ನು ಪ್ರವಾಸೋದ್ಯಮ ಇಲಾಖೆಯಿಂದ ಗುರುತಿಸಲಾಗಿದೆ.<br><br>ಕರ್ನಾಟಕ ಪ್ರವಾಸೋದ್ಯಮ ನೀತಿ 2020-25ರಡಿ ಬಾಗಲಕೋಟೆ ಜಿಲ್ಲೆಯಲ್ಲಿರುವ ಐಹೊಳೆ, ಬಾದಾಮಿ, ಪಟ್ಟದಕಲ್ಲು ಮತ್ತು ಕೂಡಲ ಸಂಗಮ ಪ್ರವಾಸಿ ತಾಣಗಳನ್ನು ಆದ್ಯತಾ ಪ್ರವಾಸಿ ತಾಣಗಳೆಂದು ಗುರುತಿಸಲಾಗಿದೆ ಹಾಗೂ ಬಾಗಲಕೋಟೆ ಜಿಲ್ಲೆಗೆ ಗುರುತಿಸಿರುವ ಪ್ರವಾಸಿ ತಾಣಗಳ ವಿವರ ಈ ಕೆಳಕಂಡಂತಿದೆ.<br><br>
<table>
<tr><th>ಜಿಲ್ಲೆ</th><th>ತಾಲ್ಲೂಕು</th><th>ಗುರುತಿಸಿರುವ ಪ್ರವಾಸಿ ತಾಣಗಳು</th><th>ತಾಣಗಳ ಸಂಖ್ಯೆ</th></tr>
<tr><td rowspan="5">ಬಾಗಲಕೋಟೆ</td><td>ಬಾಗಲಕೋಟೆ</td><td>ಮುಚಕಂಡಿಕೆರೆ, ಸಿಮಿಕೇರಿ-ಲಡ್ಡುಮುತ್ಯಾ</td><td>2</td></tr>
<tr><td>ಹುನಗುಂದ</td><td>ಐಹೊಳೆ, ಕೂಡಲಸಂಗಮ</td><td>2</td></tr>
<tr><td>ಬಾದಾಮಿ</td><td>ಬಾದಾಮಿ, ಪಟ್ಟದಕಲ್ಲು, ಮಹಾಕೂಟ</td><td>3</td></tr>
<tr><td>ಬೀಳಗಿ</td><td>ಚಿಕ್ಕಸಂಗಮ</td><td>1</td></tr>
<tr><td>ಜಮಖಂಡಿ</td><td>ಕಟ್ಟಿಕೆರೆ</td><td>1</td></tr>
</table>
<br>ಹುನಗುಂದ ಕ್ಷೇತ್ರದಲ್ಲಿ ಧಮ್ಮೂರು ಫಾಲ್ಸ್ ಮತ್ತು ರಂಗಸಮುದ್ರ ಎಂಬ ಪ್ರವಾಸಿ ತಾಣಗಳಿರುವುದು ಸರ್ಕಾರದ ಗಮನಕ್ಕೆ ಬಂದಿರುವುದಿಲ್ಲ.<br><br>2014-15ನೇ ಸಾಲಿನಲ್ಲಿ ಬಾಗಲಕೋಟೆ ಜಿಲ್ಲೆಯ ಹುನಗುಂದ ತಾಲ್ಲೂಕಿನ ಸಿದ್ದನಕೊಳ್ಳ ಪುಣ್ಯಕ್ಷೇತ್ರದ ಬಳಿ ಡಾರ್ಮಿಟರಿ, ಮೆಟ್ಟಿಲುಗಳ ನಿರ್ಮಾಣ, ಬೆಂಚುಗಳ ವ್ಯವಸ್ಥೆ, ಪ್ರತ್ಯೇಕ ಶೌಚಾಲಯ, ಕುಡಿಯುವ ನೀರಿನ ಸೌಲಭ್ಯ, ಲ್ಯಾಂಡ್ ಸ್ಕೇಪಿಂಗ್ ಮುಂತಾದ ಸೌಲಭ್ಯಗಳ ನಿರ್ಮಾಣ ಕಾಮಗಾರಿಯನ್ನು ರೂ. 53.50 ಲಕ್ಷಗಳ ಅಂದಾಜು ವೆಚ್ಚದಲ್ಲಿ ಕೆ.ಆರ್.ಐ.ಡಿ.ಎಲ್. ಸಂಸ್ಥೆಯ ಮೂಲಕ ಕೈಗೊಂಡು ಪೂರ್ಣಗೊಳಿಸಲಾಗಿರುತ್ತದೆ.</td></tr>
<tr><td>ಆ)</td><td>ಬಂದಿದ್ದಲ್ಲಿ, ಈ ಪ್ರವಾಸಿ ತಾಣಗಳನ್ನು ಅಭಿವೃದ್ಧಿಪಡಿಸಲು ಯಾವಾಗ ಅನುದಾನ ಮಂಜೂರು ಮಾಡಿ, ಕಾಮಗಾರಿಗಳನ್ನು ಕೈಗೊಳ್ಳಲಾಗುವುದು? (ಸಂಪೂರ್ಣ ವಿವರ ನೀಡುವುದು)</td></tr>
</table>

ಸಂಖ್ಯೆ: ಟಿಓಆರ್ 98 ಟಿಡಿವಿ 2021

(ಸಿ.ಪಿ. ಯೋಗೇಶ್ವರ)
ಪ್ರವಾಸೋದ್ಯಮ ಮತ್ತು ಪರಿಸರ
ಹಾಗೂ ಜೀವಿಶಾಸ್ತ್ರ, ಸಚಿವರು

**ಕರ್ನಾಟಕಸರ್ಕಾರ**

ಸಂಖ್ಯೆ: ಸಿಆಸುಇ 26 ಎಸ್‌ಎಎಂಎಸ್ 2021

ಕರ್ನಾಟಕ ಸರ್ಕಾರದ ಸಚಿವಾಲಯ
ಬಹುಮಹಡಿಗಳ ಕಟ್ಟಡ,
ಬೆಂಗಳೂರು, ದಿನಾಂಕ: 24-03-2021

3 S. 25/3/21

**ಇವರಿಂದ**
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು,
ಸಿಆಸು ಇಲಾಖೆ (ಇ-ಆಡಳಿತ) ಮತ್ತು
ಮಿಷನ್ ನಿರ್ದೇಶಕರು, ಸಕಾಲಮಿಷನ್,
ಬೆಂಗಳೂರು.

**ಇವರಿಗೆ**
ಕಾರ್ಯದರ್ಶಿಗಳು,
ಕರ್ನಾಟಕ ವಿಧಾನ ಸಭೆ,
ಬೆಂಗಳೂರು

**ಮಾನ್ಯರೆ,**

**ವಿಷಯ:** ಕರ್ನಾಟಕ ವಿಧಾನ ಸಭೆಯ ಮಾನ್ಯ ಸದಸ್ಯರಾದ ಶ್ರೀ ಸಂಜೀವ್ ಮಠಂದೂರ್(ಪುತ್ತೂರು) ರವರ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ :2048ಕ್ಕೆ ಉತ್ತರಿಸುವಬಗ್ಗೆ

**ಉಲ್ಲೇಖ:** ಅ.ಸ.ಪತ್ರಸಂಖ್ಯೆ: ವಿ.ಸ.ಪ್ರ.ಶಾ /15ನೇವಿಸ/9ಮುಉ/ಚುಗು-ಚುರ.ಪ್ರಶ್ನೆ/18/2021 ದಿನಾಂಕ: 18.03.2021

*******

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ ಉಲ್ಲೇಖದ ಪತ್ರದನ್ವಯ, ಕರ್ನಾಟಕ ವಿಧಾನ ಸಭೆಯ ಮಾನ್ಯ ಸದಸ್ಯರಾದ ಶ್ರೀ ಸಂಜೀವ್ ಮಠಂದೂರ್(ಪುತ್ತೂರು) ರವರ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ :2048ರ ಉತ್ತರವನ್ನು ಕನ್ನಡ ಭಾಷೆಯ 350 ಪ್ರತಿಗಳನ್ನು ಹಾಗೂ ಆಂಗ್ಲ ಭಾಷೆಯ 25 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಕ್ರಮಕ್ಕಾಗಿ ಕಳುಹಿಸಲು ನಿರ್ದೇಶಿಸಲ್ಪಟ್ಟಿದೇನೆ. (ಉತ್ತರದ soft copy ಯನ್ನು dsqb-kla-kar@nic.in ಇ-ಮೇಲ್ ವಿಳಾಸಕ್ಕೂ ಸಹ ಕಳುಹಿಸಿಕೊಡಲಾಗಿದೆ).

**ತಮ್ಮವಿಶ್ವಾಸಿ,**

**(ಮೇಘನ ಜಿ)**
ಆಡಳಿತಾಧಿಕಾರಿ (ಪ್ರ)
ಸಿಆಸುಇ (ಇ-ಆಡಳಿತ) ,
ಸಕಾಲ ಮಿಷನ್

24/3/21

**ಪ್ರತಿಗಳು**

1. ಮಾನ್ಯ ಮುಖ್ಯಮಂತ್ರಿಯವರ ಅಪರ ಕಾರ್ಯದರ್ಶಿಗಳು, ವಿಧಾನಸೌಧ.
2. ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಯವರ ಆಪ್ತ ಕಾರ್ಯದರ್ಶಿಗಳು, ವಿಧಾನ ಸೌಧ
3. ಸರ್ಕಾರದ ಪ್ರಧಾನ ಕಾರ್ಯದರ್ಶಿ, ಸಿಆಸುಇ ರವರ ಆಪ್ತ ಕಾರ್ಯದರ್ಶಿ, ಬಹುಮಹಡಿ ಕಟ್ಟಡ
4. ಅಪರ ಮಿಷನ್ ನಿರ್ದೇಶಕರು -1, ಸಕಾಲ ಮಿಷನ್
5. ಅಪರ ಮಿಷನ್ ನಿರ್ದೇಶಕರು -2, ಸಕಾಲ ಮಿಷನ್
6. ಸರ್ಕಾರದ ಉಪ ಕಾರ್ಯದರ್ಶಿಯವರ ಆಪ್ತ ಸಹಾಯಕರು, ಸಿಆಸುಇ (ಆಸು)
7. ಕಚೇರಿ ಪ್ರತಿ/ಶಾಖಾ ರಕ್ಷಾ ಕಡತ

# ಕರ್ನಾಟಕ ವಿಧಾನ ಸಭೆ

| | | |
|---|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | : | 2048 |
| ಸದಸ್ಯರ ಹೆಸರು | : | ಶ್ರೀ ಸಂಜೀವ ಮಠಂದೂರ್ (ಪುತ್ತೂರು) |
| ಉತ್ತರಿಸುವ ದಿನಾಂಕ | : | 25-03-2021 |
| ಉತ್ತರಿಸುವ ಸಚಿವರು | : | ಮಾನ್ಯ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು |

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಸಕಾಲ ಯೋಜನೆಯಡಿ ಎಷ್ಟು ಸೇವೆಗಳು ಪ್ರಸ್ತುತ ಸಾರ್ವಜನಿಕರಿಗೆ ಲಭ್ಯವಿರುತ್ತದೆ; | ಸಕಾಲ ಯೋಜನೆಯಡಿ ಪ್ರಸ್ತುತ ಸಾರ್ವಜನಿಕರಿಗೆ 98 ಇಲಾಖೆ/ ಸಂಸ್ಥೆಗಳ 1077 ಸೇವೆಗಳು ಲಭ್ಯವಿರುತ್ತದೆ. |
| ಆ) | ಇವುಗಳ ಪೈಕಿ ಗ್ರಾಮ ಪಂಚಾಯತ್ ಗಳ ಎಷ್ಟು ಸೇವೆಗಳು ಸಕಾಲ ವ್ಯಾಪ್ತಿಯಲ್ಲಿ ಬರುತ್ತವೆ; | ಇವುಗಳ ಪೈಕಿ ಪ್ರಸ್ತುತ 20 ಸೇವೆಗಳು ಗ್ರಾಮಪಂಚಾಯತ್‌ಗಳ ವ್ಯಾಪ್ತಿಯಲ್ಲಿ ಬರುತ್ತವೆ. |
| ಇ) | ಹೆಚ್ಚುವರಿ ಸೇವೆಗಳನ್ನು ಸಕಾಲ ವ್ಯಾಪ್ತಿಯಲ್ಲಿ ತರುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ? (ಸಂಪೂರ್ಣ ಮಾಹಿತಿ ನೀಡುವುದು) | ಸಕಾಲ ಮಿಷನ್ ವತಿಯಿಂದ ಕಾಲ ಕಾಲಕ್ಕೆ ವಿವಿಧ ಇಲಾಖೆಗಳ ಸೇವೆಗಳನ್ನು ಸಕಾಲದಡಿ ಅಧಿಸೂಚಿಸಲಾಗುತ್ತಿದೆ. ಈ ರೀತಿ ಅಧಿಸೂಚಿಸಲಾಗಿರುವ ಸೇವೆಗಳ ವರ್ಷ-ವಾರು ಮಾಹಿತಿಯನ್ನು ಈ ಕೆಳಗಿನಂತೆ ಒದಗಿಸಲಾಗಿದೆ. |

| ಕ್ರ.ಸಂ | ವರ್ಷ | ಸೇವೆಗಳ ಸಂಖ್ಯೆ |
|---|---|---|
| 1 | 2012 | 268 |
| 2 | 2013 | 182 |
| 3 | 2014 | 224 |
| 4 | 2015 | 54 |
| 5 | 2016 | 26 |
| 6 | 2017 | 78 |
| 7 | 2018 | 50 |
| 8 | 2019 | 165 |
| 9 | 2020 | 30 |

ಕಾಲ ಕಾಲಕ್ಕೆ ಸಕಾಲ ಪರಿಶೀಲನಾ ಸಭೆಯನ್ನು ಮಾನ್ಯ ಸಕಾಲ ಸಚಿವರ ಅಧ್ಯಕ್ಷತೆಯಲ್ಲಿ ನಡೆಸಿ ಸಕಾಲದಡಿ ಅಧಿಸೂಚಿಸಬೇಕಾದ ಸೇವೆಗಳನ್ನು ಕುರಿತು ಮಾನ್ಯ ಸಕಾಲ ಸಚಿವರ ಮಾರ್ಗದರ್ಶನದಂತೆ ಸಕಾಲದಡಿ ಸೇರಿಸಲು ಕ್ರಮ ಕೈಗೊಳ್ಳಲಾಗುತ್ತಿದೆ ಹಾಗೂ ಇದರೊಂದಿಗೆ ವಿವಿಧ ಇಲಾಖೆಗಳಿಂದ ಸೇವೆಗಳನ್ನು ಸಕಾಲದಡಿ ಅಧಿಸೂಚಿಸಲು ಸ್ವೀಕೃತವಾಗುವ ಪ್ರಸ್ತಾವನೆಗಳನ್ನು ಸರ್ಕಾರದ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ರಚಿಸಲಾಗಿರುವ ಸಮಿತಿಯ ಮುಂದೆ ಮಂಡಿಸಿ ಸಮಿತಿಯ ಅನುಮೋದನೆ ನಂತರ ಸಕಾಲದಡಿ ಅಧಿಸೂಚಿಸಲಾಗುತ್ತಿದೆ.

ಪ್ರಸ್ತುತ ಹೊಸ ಸೇವೆಗಳನ್ನು ಸಕಾಲದಡಿ ಅಧಿಸೂಚಿಸುವ ಯಾವುದೇ ಪ್ರಸ್ತಾವನೆ ಸರ್ಕಾರದ ಮುಂದೆ ಇರುವುದಿಲ್ಲ.

ಸಂಖ್ಯೆ: ಸಿಆಸುಇ 26 ಎಸ್ ಎ ಎಂಎಸ್ 2021

S. Su

**(ಎಸ್. ಸುರೇಶ್ ಕುಮಾರ್)**
ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ
ಹಾಗೂ ಸಕಾಲ ಸಚಿವರು

## ಕರ್ನಾಟಕ ಸರ್ಕಾರ

ಇ-ಸಂಖ್ಯೆ: ಅಪಜೀ 78 ಎಫ್‌ಡಬ್ಲ್ಯೂಎಲ್ 2021

ಕರ್ನಾಟಕ ಸರ್ಕಾರದ ಸಚಿವಾಲಯ
ಬಹುಮಹಡಿಗಳ ಕಟ್ಟಡ
ಬೆಂಗಳೂರು, ದಿನಾಂಕ:23-03-2021.

**ಇಂದ,**
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ,
ಬಹುಮಹಡಿಗಳ ಕಟ್ಟಡ,
ಬೆಂಗಳೂರು.

**ಇವರಿಗೆ,**
ಕಾರ್ಯದರ್ಶಿ,
ಕರ್ನಾಟಕ ವಿಧಾನಸಭಾ ಸಚಿವಾಲಯ,
ವಿಧಾನಸೌಧ, ಬೆಂಗಳೂರು.

ಮಾನ್ಯರೆ,

ವಿಷಯ: ಮಾನ್ಯ ವಿಧಾನಸಭೆಯ ಸದಸ್ಯರಾದ ಡಾ॥ ಅಂಜಲಿ ಹೇಮಂತ್ ನಿಂಬಾಳ್ಕರ್ (ಖಾನಾಪುರ) ಇವರ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ: 1804 ಕ್ಕೆ ಉತ್ತರವನ್ನು ಕಳುಹಿಸುವ ಬಗ್ಗೆ.

ಉಲ್ಲೇಖ: ಅರೆ ಸರ್ಕಾರಿ ಪತ್ರ ಸಂಖ್ಯೆ: ವಿಸಪ್ರಶಾ/15ನೇವಿಸ/9ಮುಲು/ಚುಗು-ಚುರ.ಪ್ರಶ್ನೆ/18/2021, ದಿನಾಂಕ: 18.03.2021

*****

ಮಾನ್ಯ ವಿಧಾನಸಭೆಯ ಸದಸ್ಯರಾದ ಡಾ॥ ಅಂಜಲಿ ಹೇಮಂತ್ ನಿಂಬಾಳ್ಕರ್ (ಖಾನಾಪುರ) ಇವರ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ: 1804 ಕ್ಕೆ ಉತ್ತರವನ್ನು ಸಂಬಂಧಿಸಿದಂತೆ ಉತ್ತರದ 350 ಕನ್ನಡ ಪ್ರತಿಗಳನ್ನು ಹಾಗೂ ಆಂಗ್ಲ ಭಾಷೆಯ 25 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಕ್ರಮಕ್ಕಾಗಿ ಕಳುಹಿಸಿಕೊಡಲು ನಿರ್ದೇಶಿಸಲ್ಪಟ್ಟಿದ್ದೇನೆ.

ನಿಮ್ಮ ನಂಬುಗೆಯ,

ಕೆ.ಆರ್. ರಮೇಶ್ 23/03/2021

(ಕೆ.ಆರ್. ರಮೇಶ್)
ಶಾಖಾಧಿಕಾರಿ
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ
(ಅರಣ್ಯ-ಎ)

## ಕರ್ನಾಟಕ ವಿಧಾನಸಭೆ

1) ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 1804

2) ಸದಸ್ಯರ ಹೆಸರು : ಡಾ॥ ಅಂಜಲಿ ಹೇಮಂತ್ ನಿಂಬಾಳ್ಕರ್ (ಖಾನಾಪುರ)

3) ಉತ್ತರಿಸುವ ದಿನಾಂಕ : 25.03.2021

4) ಉತ್ತರಿಸುವವರು : ಅರಣ್ಯ, ಕನ್ನಡ ಮತ್ತು ಸಂಸ್ಕೃತಿ ಸಚಿವರು

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಕಾಡು ಪ್ರಾಣಿಗಳಿಂದ ಪ್ರಾಣ ಕಳೆದುಕೊಂಡವರ ಕುಟುಂಬದವರಿಗೆ ಪ್ರಸ್ತುತ ನೀಡುತ್ತಿರುವ ಪರಿಹಾರದ ಮೊತ್ತವನ್ನು ಹೆಚ್ಚಳ ಮಾಡುವ ಅಗತ್ಯತೆ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ರಾಜ್ಯದಲ್ಲಿ ವನ್ಯಪ್ರಾಣಿಗಳ ದಾಳಿಯಿಂದ ಉಂಟಾಗುವ ಮಾನವ ಪ್ರಾಣ ಹಾನಿ ಪ್ರಕರಣಗಳಲ್ಲಿ ಸರ್ಕಾರದ ಆದೇಶ ಸಂಖ್ಯೆ: ಎಫ್.ಇ.ಇ 143 ಎಫ್.ಡಬ್ಲ್ಯೂ.ಎಲ್ 2010 ದಿನಾಂಕ: 03.08.2011ರ ಅನ್ವಯ ವನ್ಯಪ್ರಾಣಿಗಳ ದಾಳಿಯಿಂದ ಮೃತರಾದ ವ್ಯಕ್ತಿಯ ವಾರಸುದಾರರಿಗೆ ಪಾವತಿಸಲಾಗುತ್ತಿದ್ದ ರೂ.5,00,000/- ದಯಾತ್ಮಕ ಧನವನ್ನು ಆದೇಶ ಸಂಖ್ಯೆ: ಅಪಜೀ 66 ಎಫ್‌ಡಬ್ಲ್ಯೂಎಲ್ 2019, ದಿನಾಂಕ: 07.01.2020 ರಲ್ಲಿ ರೂ.7,50,000/- ಗಳಿಗೆ ಹೆಚ್ಚಿಸಿ ಈಗಾಗಲೇ ಆದೇಶ ಹೊರಡಿಸಲಾಗಿರುವುದರಿಂದ, ಮತ್ತೆ ಪರಿಹಾರ ಮೊತ್ತವನ್ನು ಹೆಚ್ಚಳ ಮಾಡುವ ಪ್ರಸ್ತಾವನೆ ಇರುವುದಿಲ್ಲ. |
| ಆ) | ಪ್ರಸ್ತುತ ಕಾಡು ಪ್ರಾಣಿಗಳಿಂದ ಪ್ರಾಣ ಹಾನಿಯಾದವರ ಕುಟುಂಬಗಳಿಗೆ ನೀಡುತ್ತಿರುವ ಪರಿಹಾರ ಧನದ ಮೊತ್ತವೆಷ್ಟು; | |
| ಇ) | ಸದರಿ ಪರಿಹಾರ ಧನದ ಮೊತ್ತವನ್ನು ಹೆಚ್ಚಿಸಲು ಸರ್ಕಾರವು ಕೈಗೊಂಡಿರುವ ಕ್ರಮಗಳೇನು; | |
| ಈ) | ಸಂತ್ರಸ್ತ ಕುಟುಂಬಗಳಿಗೆ ಪರಿಹಾರ ಧನದ ಜೊತೆಗೆ ಯಾವ ಯಾವ ಸೌಲಭ್ಯಗಳನ್ನು ಸರ್ಕಾರವು ನೀಡುತ್ತಿದೆ? | ಸರ್ಕಾರದ ಆದೇಶ ಸಂಖ್ಯೆ ಎಫ್.ಇ.ಇ 130 ಎಫ್.ಡಬ್ಲ್ಯೂ.ಎಲ್ 2016 ದಿನಾಂಕ:19.09.2016 ರನ್ವಯ ಶಾಶ್ವತ ಅಂಗವಿಕಲತೆ ಉಂಟಾದಲ್ಲಿ ರೂ.5,00,000/- ದಯಾತ್ಮಕ ಧನ ಮತ್ತು ಭಾಗಶಃ ಅಂಗವಿಕಲತೆ ಹೊಂದಿದ್ದಲ್ಲಿ ರೂ.2,50,000/- ದಯಾತ್ಮಕ ಧನವನ್ನು ಅಂಗವಿಕಲ ವ್ಯಕ್ತಿಗೆ ನೀಡಲಾಗುತ್ತಿದೆ ಹಾಗೂ ಗಾಯಗೊಂಡ ವ್ಯಕ್ತಿಗೆ ಗರಿಷ್ಠ ರೂ. 30,000/- ಗಳ ದಯಾತ್ಮಕ ಧನ ಪಾವತಿಸಲಾಗುತ್ತಿದೆ. |

.....2

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| | | ಮಾನವ ಗಾಯ / ಭಾಗಶಃ ಅಂಗವಿಕಲತೆ / ಶಾಶ್ವತ ಅಂಗವಿಕಲತೆ ಪ್ರಕರಣಗಳಿಗೆ ಸಂಬಂಧಿಸಿದಂತೆ ಸರ್ಕಾರದ ಆದೇಶ ಸಂಖ್ಯೆ: ಎಫ್.ಇ.ಇ 128 ಎಫ್.ಡಬ್ಲ್ಯೂ.ಎಲ್ 2013 ದಿನಾಂಕ:15.09.2015ರನ್ವಯ ದಯಾತ್ಮಕ ಧನದ ಜೊತೆಗೆ ವೈದ್ಯಕೀಯ ವೆಚ್ಚವನ್ನು ಸಿ.ಜಿ.ಹೆಚ್.ಎಸ್. ದರಗಳ ಪ್ರಕಾರ ಪಾವತಿಸಲಾಗುತ್ತದೆ.<br><br>ಸರ್ಕಾರದ ಆದೇಶ ಸಂಖ್ಯೆ. 61 ಎಫ್‌ಎಪಿ 2018 ದಿನಾಂಕ:16.10.2018ರ ಆದೇಶದಂತೆ ಮೃತರ ಕುಟುಂಬದ ವಾರಸುದಾರರಿಗೆ ಹಾಗೂ ಶಾಶ್ವತ ಅಂಗವಿಕಲತೆ ಪ್ರಕರಣಗಳಲ್ಲಿ ಸಂತ್ರಸ್ತರಿಗೆ 05 ವರ್ಷಗಳವರೆಗೆ ಪ್ರತಿ ತಿಂಗಳು ರೂ. 2,000/-ಗಳ ಮಾಸಾಶನವನ್ನು ಸಹ ನೀಡಲಾಗುತ್ತಿದೆ. |

ಸಂಖ್ಯೆ: ಅಪಜೀ 78 ಎಫ್ ಡಬ್ಲ್ಯೂಎಲ್ 2021

(ಅರವಿಂದ ಲಿಂಬಾವಳಿ)
ಅರಣ್ಯ, ಕನ್ನಡ ಮತ್ತು ಸಂಸ್ಕೃತಿ ಸಚಿವರು

## KARNATAKA LEGISTLATIVE ASSEMBLY

## (15th Assembly 9th Session)

1. Starred Question No. : 1804
2. Name of the Member : Dr. Anjali Hemanth Nimbalkar (Khanapur)
3. Date of Reply : 25-03-2021
4. Reply to be given by : Minister for Forest, Kannada and Culture

| Sl. No. | Question | Answer |
|---|---|---|
| (a) | Has it come to the notice of the Government that to increase the ex-gratia amount paid for human death due to attack by wild animal; | In case human death due to attack by wild animal an ex-gratia of Rs.5,00,000/- was being paid to the legal heir of the deceased person as per Govt. Order No. FEE 143 FWL 2010 dated: 03-08-2011. Since the same has been increased to Rs. 7,50,000/- vide Govt. Order No. FEE 66 FWL 2019 dated: 07-01-2020, there is no proposal to increase ex-gratia again. |
| (b) | At present, what is the amount of ex-gratia is being paid to the family of the deceased who died due to wild animal attack; | |
| (c) | What are the measures taken by the Government to increase the said ex-gratia amount; | |
| d) | What are the other facilities provided by the Government to the deceased family along with the ex-gratia payment? | An ex-gratia of Rs. 5,00,000/- for permanent disability and an ex-gratia upto Rs. 2,50,000/- for partial disability and an ex-gratia of Rs. 30,000/- for injury to the victim due to attack by wild animal is being paid as per Govt. Order No. FEE 130 FWL 2016 dated 19.09.2016.<br><br>In case of Human Injury / Partial Disability / Permanent Disability, medical expenditure is being paid as per the Central Government Health Scheme (CGHS) rates, as per Government Order FEE 128 |

| | | |
|---|---|---|
| | | FWL 2013 dated: 15-09-2015 along with the ex-gratia amount.<br>Also, as per Govt. Order No. FEE 61 FAP 2018 dated: 16-10-2018 a monthly pension of Rs.2,000/- for a period of 5 years is being paid along with the ex-gratia to the legal heir of the deceased person and to the victim in case of Permanent Disability caused due to attack by wild animal. |

File No: FEE 79 FWL 2021

Sd/-
**(ARAVINDA LIMABAVALI)**
Minister for Forest, Kannada and Culture

ಕರ್ನಾಟಕ ಸರ್ಕಾರ

ಸಂಖೆ:ಇಪಿ 67 ಡಿಜಿಡಬ್ಲ್ಯೂ 2021

ಕರ್ನಾಟಕ ಸರ್ಕಾರದ ಸಚಿವಾಲಯ,
ಬಹುಮಹಡಿ ಕಟ್ಟಡ,
ಬೆಂಗಳೂರು, ದಿನಾಂಕ: 24/03/2021.

ಇವರಿಂದ:-
ಸರ್ಕಾರದ ಪ್ರಧಾನ ಕಾರ್ಯದರ್ಶಿ,
(ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ)
ಶಿಕ್ಷಣ ಇಲಾಖೆ,
ಬೆಂಗಳೂರು.

ಇವರಿಗೆ:-
ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭಾ ಸಚಿವಾಲಯ,
ವಿಧಾನಸೌಧ,
ಬೆಂಗಳೂರು.

ಮಾನ್ಯರೆ,

ವಿಷಯ:- ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ನಂಜೇಗೌಡ ಕೆ.ವೈ. (ಮಾಲೂರು) ಇವರು ಮಂಡಿಸಿರುವ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ: 3644ಕ್ಕೆ ಉತ್ತರಿಸುವ ಬಗ್ಗೆ.

ಉಲ್ಲೇಖ:- ಕರ್ನಾಟಕ ವಿಧಾನ ಸಭೆ ಸಚಿವಾಲಯದ ಪತ್ರ ಸಂಖ್ಯೆ: ಪ್ರಶಾವಿಸ/15ನೇವಿಸ/9ಮುಉ/ಪ್ರ.ಸಂ.3644/2021 ದಿನಾಂಕ:18-03-2021.

* * *

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ ಉಲ್ಲೇಖಿತ ಪತ್ರದಲ್ಲಿ ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ನಂಜೇಗೌಡ ಕೆ.ವೈ. (ಮಾಲೂರು) ಇವರು ಮಂಡಿಸಿರುವ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ: 3644ಕ್ಕೆ ಸಂಬಂಧಿಸಿದಂತೆ ತಯಾರಿಸಿರುವ ವರದಿಯ **350** ಪ್ರತಿಗಳನ್ನು ಈ ಪತ್ರದೊಂದಿಗೆ ಲಗತ್ತಿಸಿ, ಮುಂದಿನ ಕ್ರಮಕ್ಕಾಗಿ ತಮಗೆ ಕಳುಹಿಸಲು ನಾನು ನಿರ್ದೇಶಿತನಾಗಿದ್ದೇನೆ.

ತಮ್ಮ ನಂಬುಗೆಯ,

24/3/21
(ಎ.ಸಿ.ಮಧು)
ಶಾಖಾಧಿಕಾರಿ,
ಶಿಕ್ಷಣ ಇಲಾಖೆ(ಪದವಿ ಪೂರ್ವ ಶಿಕ್ಷಣ)

# ಕರ್ನಾಟಕ ವಿಧಾನ ಸಭೆ

| | | |
|---|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | : | 3644 |
| ಸದಸ್ಯರ ಹೆಸರು | : | ಶ್ರೀ ನಂಜೇಗೌಡ ಕೆ.ವೈ (ಮಾಲೂರು) |
| ಉತ್ತರಿಸುವ ದಿನಾಂಕ | : | 25-03-2021. |
| ಉತ್ತರಿಸುವ ಸಚಿವರು | : | ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು |

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ದೈಹಿಕ ಶಿಕ್ಷಣ ವಿಷಯಕ್ಕೆ ಸಂಬಂಧಿಸಿದಂತೆ ಪ್ರೊ: ಎಲ್.ಆರ್. ವೈದ್ಯನಾಥನ್ ಆಯೋಗದ ವರದಿಯಂತೆ, ರಾಜ್ಯದ ಎಲ್ಲಾ ಪದವಿ ಪೂರ್ವ ಕಾಲೇಜುಗಳಲ್ಲಿ ದೈಹಿಕ ಶಿಕ್ಷಣ ಉಪನ್ಯಾಸಕರ ನೇಮಕಾತಿ ಮಾಡಲಾಗಿದೆಯೇ; (ಜಿಲ್ಲಾವಾರು ಮಾಹಿತಿ ಒದಗಿಸುವುದು) | ಪ್ರೊ: ಎಲ್.ಆರ್. ವೈದ್ಯನಾಥನ್ ಆಯೋಗದ ವರದಿಯಂತೆ ಪದವಿ ಪೂರ್ವ ಶಿಕ್ಷಣ ಇಲಾಖೆಯಲ್ಲಿ 20 ದೈಹಿಕ ಶಿಕ್ಷಣ ಉಪನ್ಯಾಸಕರ ಹುದ್ದೆಗಳು ಮಂಜೂರಾಗಿರುತ್ತವೆ (ಜಿಲ್ಲಾವಾರು ವಿವರಗಳನ್ನು ಅನುಬಂಧದಲ್ಲಿ ಲಗತ್ತಿಸಿದೆ).<br><br>ಸದರಿ 20 ಹುದ್ದೆಗಳಲ್ಲಿ 10 ನೇರ ನೇಮಕಾತಿ ಮೂಲಕ ಮತ್ತು 10 ಬಡ್ತಿ ಮೂಲಕ ಭರ್ತಿ ಮಾಡಿಕೊಳ್ಳಲು ಅವಕಾಶ ಕಲ್ಪಿಸಲಾಗಿರುತ್ತದೆ. ಅದರಂತೆ 10 ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ತುಂಬಿಕೊಳ್ಳಲು ದಿನಾಂಕ:10-11-2020 ಮತ್ತು ದಿನಾಂಕ:12-02-2020ರ ಪತ್ರಗಳಲ್ಲಿ ಕೇಂದ್ರಿಕೃತ ದಾಖಲಾತಿ ಘಟಕವನ್ನು ಕೋರಲಾಗಿತ್ತು. ವಿಶೇಷಾಧಿಕಾರಿಗಳು, ಕೇಂದ್ರಿಕೃತ ದಾಖಲಾತಿ ಘಟಕ ಇವರ ದಿನಾಂಕ:28-01-2021ರ ಪತ್ರದಲ್ಲಿ ನೇಮಕಾತಿ ಅಧಿಸೂಚನೆಯನ್ನು ಪದವಿ ಪೂರ್ವ ಶಿಕ್ಷಣ ಇಲಾಖೆಯ ನಿರ್ದೇಶನಾಲಯದಿಂದಲೇ ಹೊರಡಿಸಿ ಸದರಿ ಅಧಿಸೂಚನೆಯೊಂದಿಗೆ ಪಠ್ಯಕ್ರಮ, ಪ್ರಶ್ನೆ ಪತ್ರಿಕೆ ಸ್ವರೂಪದ ಬಗ್ಗೆ ಮಾಹಿತಿಯನ್ನು ನೀಡುವಂತೆ ಕೋರಿರುತ್ತಾರೆ. ಅದರಂತೆ ಕ್ರಮವಹಿಸಲಾಗುತ್ತಿದೆ. |
| ಆ) | ಪ್ರೌಢ ಶಾಲೆಗಳಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಸ್ನಾತಕೋತ್ತರ ಪದವಿ ಪಡೆದ ಗ್ರೇಡ್-1 ದೈಹಿಕ ಶಿಕ್ಷಣ ಶಿಕ್ಷಕರನ್ನು ಪದವಿ ಪೂರ್ವ ಕಾಲೇಜುಗಳಿಗೆ ಬಡ್ತಿ ನೀಡಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು;(ವಿವರ ಒದಗಿಸುವುದು) | ಬಡ್ತಿ ಕೋಟಾದ 10 ಹುದ್ದೆಗಳನ್ನು ಬಡ್ತಿ ಮೂಲಕ ತುಂಬಲು ದಿನಾಂಕ:07-10-2020ರಲ್ಲಿ ಸಾರ್ವಜನಿಕ ಶಿಕ್ಷಣ ಇಲಾಖೆಯ ಪ್ರೌಢ ಶಾಲಾ ಗ್ರೇಡ್-1 ದೈಹಿಕ ಶಿಕ್ಷಣ ಶಿಕ್ಷಕರ ಕ್ರೋಢೀಕೃತ ಜೇಷ್ಠತಾ ಪಟ್ಟಿಯನ್ನು ಸಲ್ಲಿಸಲು ಸಾರ್ವಜನಿಕ ಶಿಕ್ಷಣ ಇಲಾಖೆಯ ಆಯುಕ್ತರನ್ನು ಕೋರಲಾಗಿತ್ತು. ಅದರಂತೆ, ದಿನಾಂಕ:10-11-2020ರಲ್ಲಿ ಪ್ರೌಢ ಶಾಲಾ ಗ್ರೇಡ್-1 ದೈಹಿಕ ಶಿಕ್ಷಣ ಶಿಕ್ಷಕರ ಕ್ರೋಢೀಕೃತ ಜೇಷ್ಠತಾ ಪಟ್ಟಿಯನ್ನು ಸಲ್ಲಿಸಿರುತ್ತಾರೆ. ಅರ್ಹ ನೌಕರರ ಇತ್ತೀಚಿನ 05 ವರ್ಷಗಳ ವಾರ್ಷಿಕ ಕಾರ್ಯನಿರ್ವಹಣಾ ವರದಿ, ಇಲಾಖಾ ಪರೀಕ್ಷೆ/ಕನ್ನಡ ಭಾಷಾ ಪರೀಕ್ಷೆ ಉತ್ತೀರ್ಣರಾಗಿರುವ ಮಾಹಿತಿಯನ್ನೊಳಗೊಂಡ ವ್ಯಕ್ತಿ ಪೂರ್ವೋತ್ತರ ದಸ್ತಾವೇಜುಗಳನ್ನು ಪಡೆದು ಬಡ್ತಿ ನೀಡುವ ಬಗ್ಗೆ ಕ್ರಮವಹಿಸಲಾಗುತ್ತಿದೆ. |

| | | |
|---|---|---|
| ಇ) | ಪ್ರೌಢ ಶಾಲೆಗಳಲ್ಲಿನ ದೈಹಿಕ ಶಿಕ್ಷಣ ಶಿಕ್ಷಕರಿಗೆ ಪದವಿ ಪೂರ್ವ ಕಾಲೇಜುಗಳ ದೈಹಿಕ ಶಿಕ್ಷಣ ಶಿಕ್ಷಕರಾಗಿ ಬಡ್ತಿ ನೀಡಲು ಇರುವ ಮಾನದಂಡಗಳೇನು; (ವಿವರ ಒದಗಿಸುವುದು) | ಪ್ರೌಢ ಶಾಲೆಗಳಲ್ಲಿನ ದೈಹಿಕ ಶಿಕ್ಷಣ ಶಿಕ್ಷಕರಿಗೆ ಪದವಿ ಪೂರ್ವ ಕಾಲೇಜುಗಳ ದೈಹಿಕ ಶಿಕ್ಷಣ ಶಿಕ್ಷಕರಾಗಿ ಬಡ್ತಿ ನೀಡಲು ವೃಂದ ಮತ್ತು ನೇಮಕಾತಿ ನಿಯಮಗಳನ್ವಯ ಈ ಕೆಳಕಂಡ ಮಾನದಂಡಗಳನ್ನು ನಿಗಧಿಪಡಿಸಲಾಗಿರುತ್ತದೆ–<br>• ದೈಹಿಕ ಶಿಕ್ಷಣದಲ್ಲಿ ಸ್ನಾತಕೋತ್ತರ ಪದವಿಯನ್ನು ದ್ವಿತೀಯ ದರ್ಜೆಯಲ್ಲಿ ಉತ್ತೀರ್ಣರಾಗಿರಬೇಕು(Second Class).<br>• ಸಾರ್ವಜನಿಕ ಶಿಕ್ಷಣ ಇಲಾಖೆಯ ಪ್ರೌಢ ಶಾಲಾ ಗ್ರೇಡ್–1 ದೈಹಿಕ ಶಿಕ್ಷಣ ಶಿಕ್ಷಕರಾಗಿ 05 ವರ್ಷಗಳಿಗಿಂತ ಕಡಿಮೆ ಇಲ್ಲದೇ ಸೇವೆ ಸಲ್ಲಿಸಿರಬೇಕು. |
| ಈ) | ಅರ್ಹತೆ ಹೊಂದಿರುವ ಪ್ರೌಢ ಶಾಲೆಗಳ ದೈಹಿಕ ಶಿಕ್ಷಕರಿಗೆ, ಪದವಿ ಪೂರ್ವ ಕಾಲೇಜುಗಳಿಗೆ ಬಡ್ತಿ ನೀಡುವ ಪ್ರಕ್ರಿಯೆ ಪ್ರಸ್ತುತ ಯಾವ ಹಂತದಲ್ಲಿದೆ; ಈ ಪ್ರಕ್ರಿಯೆಯನ್ನು ಯಾವ ಕಾಲಮಿತಿಯಲ್ಲಿ ಪೂರ್ಣಗೊಳಿಸಲಾಗುವುದು? (ವಿವರ ಒದಗಿಸುವುದು) | ಬಡ್ತಿ ಕೋಟಾದ 10 ಹುದ್ದೆಗಳನ್ನು ಬಡ್ತಿ ಮೂಲಕ ತುಂಬಲು ದಿನಾಂಕ:07–10–2020ರಲ್ಲಿ ಸಾರ್ವಜನಿಕ ಶಿಕ್ಷಣ ಇಲಾಖೆಯ ಪ್ರೌಢ ಶಾಲಾ ಗ್ರೇಡ್–1 ದೈಹಿಕ ಶಿಕ್ಷಣ ಶಿಕ್ಷಕರ ಕ್ರೋಢೀಕೃತ ಜೇಷ್ಠತಾ ಪಟ್ಟಿಯನ್ನು ಸಲ್ಲಿಸಲು ಸಾರ್ವಜನಿಕ ಶಿಕ್ಷಣ ಇಲಾಖೆಯ ಆಯುಕ್ತರನ್ನು ಕೋರಲಾಗಿತ್ತು. ಅದರಂತೆ, ದಿನಾಂಕ:10–11–2020ರಲ್ಲಿ ಪ್ರೌಢ ಶಾಲಾ ಗ್ರೇಡ್–1 ದೈಹಿಕ ಶಿಕ್ಷಣ ಶಿಕ್ಷಕರ ಕ್ರೋಢೀಕೃತ ಜೇಷ್ಠತಾ ಪಟ್ಟಿಯನ್ನು ಸಲ್ಲಿಸಿರುತ್ತಾರೆ. ಅರ್ಹ ನೌಕರರ ಇತ್ತೀಚಿನ 05 ವರ್ಷಗಳ ವಾರ್ಷಿಕ ಕಾರ್ಯನಿರ್ವಹಣಾ ವರದಿ, ಇಲಾಖಾ ಪರೀಕ್ಷೆ/ಕನ್ನಡ ಭಾಷಾ ಪರೀಕ್ಷೆ ಉತ್ತೀರ್ಣರಾಗಿರುವ ಮಾಹಿತಿಯನ್ನೊಳಗೊಂಡ ವ್ಯಕ್ತಿ ಪೂರ್ವೋತ್ತರ ದಸ್ತಾವೇಜುಗಳನ್ನು ಪಡೆದು ಬಡ್ತಿ ನೀಡುವ ಬಗ್ಗೆ ಕ್ರಮವಹಿಸಲಾಗುತ್ತಿದೆ. |

**ಸಂಖ್ಯೆ: ಇಪಿ 67 ಡಿಜಿಡಬ್ಲ್ಯೂ 2021**

(ಎಸ್. ಸುರೇಶ್ ಕುಮಾರ್)
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು.

78

ಅನುಬಂಧ

| ಕ್ರಸಂ | ಹುದ್ದೆ ಮಂಜೂರಾಗಿರುವ ಸರ್ಕಾರಿ ಕಾಲೇಜುಗಳ ವಿವರ | ಖಾಲಿ ಹುದ್ದೆಗಳ ವಿವರ |
|---|---|---|
| 01 | ಸರ್ಕಾರಿ ಪದವಿ ಪೂರ್ವ ಕಾಲೇಜು ಮಾಗಡಿ, ರಾಮನಗರ ಜಿಲ್ಲೆ. | 1 |
| 02 | ಸರ್ಕಾರಿ ಪದವಿ ಪೂರ್ವ ಕಾಲೇಜು, ಕೂಡ್ಲಗಿ, ಬಳ್ಳಾರಿ ಜಿಲ್ಲೆ. | 1 |
| 03 | ಸರ್ಕಾರಿ ಎಸ್.ಎಂ.ಎನ್.ಎನ್. ಪದವಿ ಪೂರ್ವ ಕಾಲೇಜು,ಬೀಳಗಿ, ಬಾಗಲಕೋಟೆ ಜಿಲ್ಲೆ. | 1 |
| 04 | ಸರ್ಕಾರಿ ಪದವಿ ಪೂರ್ವ ಕಾಲೇಜು. ಬಸವನ ಬಾಗೇವಾಗೇವಾಡಿ, ಬಿಜಾಪುರ ಜಿಲ್ಲೆ. | 1 |
| 05 | ಬಾಲಕರ ಸರ್ಕಾರಿ ಪದವಿ ಪೂರ್ವ ಕಾಲೇಜು, ಹುಮನಾಬಾದ್ ಬೀದರ್ ಜಿಲ್ಲೆ. | 1 |
| 06 | ಸರ್ಕಾರಿ ಪದವಿ ಪೂರ್ವ ಕಾಲೇಜು, ಚನ್ನಗಿರಿ, ದಾವಣಗೆರೆ ಜಿಲ್ಲೆ | 1 |
| 07 | ಸರ್ಕಾರಿ ಪದವಿ ಪೂರ್ವ ಕಾಲೇಜು, ಚಳ್ಳಕೆರೆ, ಚಿತ್ರದುರ್ಗ ಜಿಲ್ಲೆ | 1 |
| 08 | ಸರ್ಕಾರಿ ಪದವಿ ಪೂರ್ವ ಕಾಲೇಜು ಆಲ್ದೂರು, ಚಿಕ್ಕಮಗಳೂರು ಜಿಲ್ಲೆ. | 1 |
| 09 | ಸರ್ಕಾರಿ ಪದವಿ ಪೂರ್ವ ಕಾಲೇಜು, ಯಲಿವಾಲ್ ಕುಂದಗಲ್ ತಾ॥ ಧಾರವಾಡ ಜಿಲ್ಲೆ. | 1 |
| 10 | ಸರ್ಕಾರಿ ಪದವಿ ಪೂರ್ವ ಕಾಲೇಜು, ಸೇಡಂ, ಗುಲಬರ್ಗ ಜಿಲ್ಲೆ. | 1 |
| 11 | ಸರ್ಕಾರಿ ಪದವಿ ಪೂರ್ವ ಕಾಲೇಜು, ಬಾಗೇಪಲ್ಲಿ, ಚಿಕ್ಕಬಳ್ಳಾಪುರ ಜಿಲ್ಲೆ. | 1 |
| 12 | ಬಾಲಕರ ಸರ್ಕಾರಿ ಪದವಿ ಪೂರ್ವ ಕಾಲೇಜು, ಚಾಮರಾಜನಗರ. | 1 |
| 13 | ಸರ್ಕಾರಿ ಪದವಿ ಪೂರ್ವ ಕಾಲೇಜು, ಹೆಗ್ಗಡದೇವನ ಕೋಟೆ, ಮೈಸೂರು ಜಿಲ್ಲೆ | 1 |
| 14 | ಸರ್ಕಾರಿ ಪದವಿ ಪೂರ್ವ ಕಾಲೇಜು,ಯಲಬುರ್ಗ, ಕೊಪ್ಪಳ ಜಿಲ್ಲೆ | 1 |
| 15 | ಬಾಲಕರ ಸರ್ಕಾರಿ ಪದವಿ ಪೂರ್ವ ಕಾಲೇಜು, ಸಿಂಧನೂರು, ರಾಯಚೂರು ಜಿಲ್ಲೆ | 1 |
| 16 | ಸರ್ಕಾರಿ ಪದವಿ ಪೂರ್ವ ಕಾಲೇಜು, ಉಪ್ಪಿನಂಗಡಿ, ಪುತ್ತೂರು ತಾ। ದ.ಕ ಜಿಲ್ಲೆ | 1 |
| 17 | ಸರ್ಕಾರಿ ಪದವಿ ಪೂರ್ವ ಕಾಲೇಜು, ಸೊರಬ ಶಿವಮೊಗ್ಗ ಜಿಲ್ಲೆ. | 1 |
| 18 | ಸರ್ಕಾರಿ ಪದವಿ ಪೂರ್ವ ಕಾಲೇಜು, ಶಿರಾ. ತುಮಕೂರು ಜಿಲ್ಲೆ. | 1 |
| 19 | ಸರ್ಕಾರಿ ಪದವಿ ಪೂರ್ವ ಕಾಲೇಜು. ಬಾಗೇಪಲ್ಲಿ ಕೋಲಾರ ಜಿಲ್ಲೆ. | 1 |
| 20 | ಸರ್ಕಾರಿ ಪದವಿ ಪೂರ್ವ ಕಾಲೇಜು, ಯಾದಗಿರಿ | 1 |

ಆಡಳಿತಾಧಿಕಾರಿ
ಉಪ ನಿರ್ದೇಶಕರು (ಆಡಳಿತ)
ಪದವಿ ಪೂರ್ವ ಶಿಕ್ಷಣ ಇಲಾಖೆ

ಕರ್ನಾಟಕ ಸರ್ಕಾರ

ಸಂಖ್ಯೆ:ಇಪಿ 68 ಡಿಜಿಡಬ್ಲ್ಯೂ 2021

ಕರ್ನಾಟಕ ಸರ್ಕಾರದ ಸಚಿವಾಲಯ,
ಬಹುಮಹಡಿ ಕಟ್ಟಡ,
ಬೆಂಗಳೂರು, ದಿನಾಂಕ:24/03/2021.

ಇವರಿಂದ:-
ಸರ್ಕಾರದ ಪ್ರಧಾನ ಕಾರ್ಯದರ್ಶಿ,
(ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ)
ಶಿಕ್ಷಣ ಇಲಾಖೆ,
ಬೆಂಗಳೂರು.

8

25/3/21

ಇವರಿಗೆ:-
ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭಾ ಸಚಿವಾಲಯ,
ವಿಧಾನಸೌಧ,
ಬೆಂಗಳೂರು.

ಮಾನ್ಯರೆ,

ವಿಷಯ:- ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ಜಾರ್ಜ್ ಕೆ.ಜೆ. (ಸರ್ವಜ್ಞನಗರ) ಇವರು ಮಂಡಿಸಿರುವ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ: 3715ಕ್ಕೆ ಉತ್ತರಿಸುವ ಬಗ್ಗೆ.

ಉಲ್ಲೇಖ:- ಕರ್ನಾಟಕ ವಿಧಾನ ಸಭೆ ಸಚಿವಾಲಯದ ಪತ್ರ ಸಂಖ್ಯೆ: ಪ್ರಶಾವಿಸ/15ನೇವಿಸ/9ಮುಉ/ಪ್ರ.ಸಂ.3715/2021 ದಿನಾಂಕ:18-03-2021.

* * *

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ ಉಲ್ಲೇಖಿತ ಪತ್ರದಲ್ಲಿ ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ಜಾರ್ಜ್ ಕೆ.ಜೆ. (ಸರ್ವಜ್ಞನಗರ) ಇವರು ಮಂಡಿಸಿರುವ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ: 3715ಕ್ಕೆ ಸಂಬಂಧಿಸಿದಂತೆ ತಯಾರಿಸಿರುವ ವರದಿಯ **350** ಪ್ರತಿಗಳನ್ನು ಈ ಪತ್ರದೊಂದಿಗೆ ಲಗತ್ತಿಸಿ, ಮುಂದಿನ ಕ್ರಮಕ್ಕಾಗಿ ತಮಗೆ ಕಳುಹಿಸಲು ನಾನು ನಿರ್ದೇಶಿತನಾಗಿದ್ದೇನೆ.

ತಮ್ಮ ನಂಬುಗೆಯ,

A. C. Madhu 24/3/21

(ಎ.ಸಿ.ಮಧು)
ಶಾಖಾಧಿಕಾರಿ,
ಶಿಕ್ಷಣ ಇಲಾಖೆ(ಪದವಿ ಪೂರ್ವ ಶಿಕ್ಷಣ)

## ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 3715
ಸದಸ್ಯರ ಹೆಸರು : ಶ್ರೀ ಜಾರ್ಜ್ ಕೆ.ಜೆ. (ಸರ್ವಜ್ಞನಗರ)
ಉತ್ತರಿಸುವ ದಿನಾಂಕ : 25-03-2021.
ಉತ್ತರಿಸುವ ಸಚಿವರು : ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಬೆಂಗಳೂರು ನಗರ ಜಿಲ್ಲೆಯಲ್ಲಿ ಎಷ್ಟು ಸರ್ಕಾರಿ ಪದವಿ ಪೂರ್ವ ಕಾಲೇಜುಗಳಿವೆ; (ವಿಧಾನಸಭಾ ಕ್ಷೇತ್ರವಾರು ವಿವರ ನೀಡುವುದು) | ಬೆಂಗಳೂರು ನಗರ ಜಿಲ್ಲೆಯಲ್ಲಿ ಒಟ್ಟು 35 ಸರ್ಕಾರಿ ಪದವಿ ಪೂರ್ವ ಕಾಲೇಜುಗಳಿವೆ.<br><br>ವಿಧಾನಸಭಾ ಕ್ಷೇತ್ರವಾರು ಸರ್ಕಾರಿ ಪದವಿ ಪೂರ್ವ ಕಾಲೇಜುಗಳ ಪಟ್ಟಿಯನ್ನು ಅನುಬಂಧ-1ರಲ್ಲಿ ಒದಗಿಸಿದೆ. |
| ಆ) | ಬೆಂಗಳೂರು ನಗರ ಜಿಲ್ಲೆಗೆ ನೂತನವಾಗಿ ಸರ್ಕಾರಿ ಪದವಿ ಪೂರ್ವ ಕಾಲೇಜುಗಳನ್ನು ತೆರೆಯುವ ಪ್ರಸ್ತಾವನೆಯು ಸರ್ಕಾರದ ಮುಂದಿದೆಯೇ; | ಬೆಂಗಳೂರು ನಗರ ಜಿಲ್ಲೆಯಲ್ಲಿ ಒಟ್ಟು 18 ಸರ್ಕಾರಿ ಪ್ರೌಢ ಶಾಲೆಗಳನ್ನು ಸರ್ಕಾರಿ ಪದವಿ ಪೂರ್ವ ಕಾಲೇಜುಗಳನ್ನಾಗಿ ಮೇಲ್ದರ್ಜೆಗೇರಿಸುವ ಪ್ರಸ್ತಾವನೆಯು ಸರ್ಕಾರದ ಪರಿಶೀಲನೆಯಲ್ಲಿದೆ. |
| ಇ) | ಹಾಗಿದ್ದಲ್ಲಿ, ಬೆಂಗಳೂರು ನಗರ ಜಿಲ್ಲೆಯ ವ್ಯಾಪ್ತಿಯಡಿ ಬರುವ ಯಾವ ಯಾವ ವಿಧಾನಸಭಾ ಕ್ಷೇತ್ರಗಳಿಗೆ ಪದವಿ ಪೂರ್ವ ಕಾಲೇಜುಗಳನ್ನು ಮಂಜೂರು ಮಾಡಲು ಕ್ರಮ ವಹಿಸಲಾಗುವುದು ? (ವಿವರ ನೀಡುವುದು) | ರಾಜ್ಯದಲ್ಲಿ ಹೊಸ ಸರ್ಕಾರಿ ಪದವಿ ಪೂರ್ವ ಕಾಲೇಜುಗಳ ಅವಶ್ಯಕತೆಯಿರುವ 361 ಸರ್ಕಾರಿ ಪ್ರೌಢ ಶಾಲೆಗಳನ್ನು ಸರ್ಕಾರಿ ಪದವಿ ಪೂರ್ವ ಕಾಲೇಜುಗಳನ್ನಾಗಿ ಮೇಲ್ದರ್ಜೆಗೇರಿಸುವ ಪ್ರಸ್ತಾವನೆಯು ಸರ್ಕಾರದ ಪರಿಶೀಲನೆಯಲ್ಲಿದೆ. ಸದರಿ ಸರ್ಕಾರಿ ಪ್ರೌಢ ಶಾಲೆಗಳನ್ನು ಸರ್ಕಾರಿ ಪದವಿ ಪೂರ್ವ ಕಾಲೇಜುಗಳನ್ನಾಗಿ ಮೇಲ್ದರ್ಜೆಗೇರಿಸುವ ಪ್ರಸ್ತಾವನೆಯ ಪೈಕಿ ಬೆಂಗಳೂರು ನಗರ ಜಿಲ್ಲೆಯ 18 ಪ್ರೌಢ ಶಾಲೆಗಳು ಸೇರಿರುತ್ತದೆ. ವಿಧಾನ ಸಭಾವಾರು ಪ್ರಸ್ತಾವನೆಗಳ ಪಟ್ಟಿಯನ್ನು ಅನುಬಂಧ-2ರಲ್ಲಿ ಒದಗಿಸಿದೆ.<br><br>ಮೇಲಿನ ಸರ್ಕಾರಿ ಪ್ರೌಢ ಶಾಲೆಗಳನ್ನು ಸರ್ಕಾರಿ ಪದವಿ ಪೂರ್ವ ಕಾಲೇಜುಗಳನ್ನಾಗಿ ಉನ್ನತೀಕರಿಸಲು ಮಾಹಿತಿಗಳನ್ನು ಕ್ರೋಢೀಕರಿಸಲಾಗುತ್ತಿದ್ದು, ಸದರಿ ವಿವರಗಳನ್ನು ಪಡೆದ ನಂತರ ಆರ್ಥಿಕ ಇಲಾಖೆಯ ಸಹಮತಿಗೆ ಕಳುಹಿಸಲು ಕ್ರಮವಹಿಸಲಾಗುವುದು. |

**ಸಂಖ್ಯೆ: ಇಪಿ 68 ಡಿಜಿಡಬ್ಲ್ಯೂ 2021**

(ಎಸ್. ಸುರೇಶ್ ಕುಮಾರ್)
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು.

## ಅನುಬಂಧ-1

ಬೆಂಗಳೂರು ನಗರ ಜಿಲ್ಲೆಯಲ್ಲಿ ಬೆಂಗಳೂರು ಉತ್ತರ ಹಾಗೂ ದಕ್ಷಿಣ ಜಿಲ್ಲೆಗಳು ಒಳಗೊಂಡಿರುತ್ತವೆ.

1. ಬೆಂಗಳೂರು ಉತ್ತರ ಜಿಲ್ಲೆಯಲ್ಲಿ ಒಟ್ಟು 15 ಸರ್ಕಾರಿ ಪದವಿ ಪೂರ್ವ ಕಾಲೇಜು, ಅವುಗಳು:

| ಕ್ರಸಂ | ಕಾಲೇಜಿನ ಹೆಸರು | ವಿಧಾನಸಭಾ ಕ್ಷೇತ್ರ |
|---|---|---|
| 1 | ಸರ್ಕಾರಿ ಪದವಿ ಪೂರ್ವ ಕಾಲೇಜು, 18ನೇ ಅಡ್ಡರಸ್ತೆ, ಮಲ್ಲೇಶ್ವರಂ, ಬೆಂ-ಉ. | ಮಲ್ಲೇಶ್ವರಂ |
| 2 | ಸರ್ಕಾರಿ ಪದವಿ ಪೂರ್ವ ಕಾಲೇಜು, 13ನೇ ಅಡ್ಡರಸ್ತೆ, ಮಲ್ಲೇಶ್ವರಂ, ಬೆಂ-ಉ. | |
| 3 | ಸರ್ಕಾರಿ ಪದವಿ ಪೂರ್ವ ಕಾಲೇಜು, ಯಲಹಂಕ, ಬೆಂ-ಉ. | ಯಲಹಂಕ. |
| 4 | ಸರ್ಕಾರಿ ಪದವಿ ಪೂರ್ವ ಕಾಲೇಜು, ಹೆಸರಘಟ್ಟ, ಬೆಂ-ಉ. | |
| 5 | ಸರ್ಕಾರಿ ಪದವಿ ಪೂರ್ವ ಕಾಲೇಜು, ರಾಜಾನುಕುಂಟೆ, ಬೆಂ-ಉ. | |
| 6 | ಸರ್ಕಾರಿ ಪದವಿ ಪೂರ್ವ ಕಾಲೇಜು, ಜೆ,ಸಿ,ನಗರ, ಬೆಂ-ಉ. | ಹೆಬ್ಬಾಳ |
| 7 | ಸರ್ಕಾರಿ ಪದವಿ ಪೂರ್ವ ಕಾಲೇಜು, ಹೆಬ್ಬಾಳ, ಬೆಂ-ಉ. | |
| 8 | ಸರ್ಕಾರಿ ಪದವಿ ಪೂರ್ವ ಕಾಲೇಜು, ಪೀಣ್ಯಾ, ಬೆಂ-ಉ. | ರಾಜರಾಜೇಶ್ವರಿ ನಗರ |
| 9 | ಸರ್ಕಾರಿ ಪದವಿ ಪೂರ್ವ ಕಾಲೇಜು, ಜಾಲಹಳ್ಳಿ, ಬೆಂ-ಉ. | |
| 10 | ಸರ್ಕಾರಿ ಪದವಿ ಪೂರ್ವ ಕಾಲೇಜು, ಶಿವನಗರ, ಬೆಂ-ಉ. | ರಾಜಾಜಿನಗರ |
| 11 | ಸರ್ಕಾರಿ ಪದವಿ ಪೂರ್ವ ಕಾಲೇಜು, ಬಾಗಲೂರು, ಬೆಂ-ಉ. | ಬ್ಯಾಟರಾಯನಪುರ |
| 12 | ಸರ್ಕಾರಿ ಪದವಿ ಪೂರ್ವ ಕಾಲೇಜು, ಜಕ್ಕೂರು, ಬೆಂ-ಉ. | |
| 13 | ಸರ್ಕಾರಿ ಪದವಿ ಪೂರ್ವ ಕಾಲೇಜು, ಕೊಡಿಗೇಹಳ್ಳಿ, ಬೆಂ-ಉ. | |
| 14 | ಸರ್ಕಾರಿ ಪದವಿ ಪೂರ್ವ ಕಾಲೇಜು, ಡಿ,ಜೆ,ಹಳ್ಳಿ, ಬೆಂ-ಉ. | ಪುಲಕೇಶಿನಗರ |
| 15 | ಸರ್ಕಾರಿ ಪದವಿ ಪೂರ್ವ ಕಾಲೇಜು, ಟಿ ದಾಸರಹಳ್ಳಿ, ಬೆಂ-ಉ. | ದಾಸರಹಳ್ಳಿ |

2. ಬೆಂಗಳೂರು ದಕ್ಷಿಣ ಜಿಲ್ಲೆಯಲ್ಲಿ ಒಟ್ಟು 20 ಸರ್ಕಾರಿ ಪದವಿ ಪೂರ್ವ ಕಾಲೇಜು, ಅವುಗಳು:

| ಕ್ರಸಂ | ಕಾಲೇಜಿನ ಹೆಸರು | ವಿಧಾನಸಭಾ ಕ್ಷೇತ್ರ |
|---|---|---|
| 1 | ಎಬಿಎಸ್ ಸರ್ಕಾರಿ ಪದವಿ ಪೂರ್ವ ಕಾಲೇಜು, ಆನೇಕಲ್, ಬೆಂ-ದ. | ಆನೇಕಲ್ |
| 2 | ಸರ್ಕಾರಿ ಪದವಿ ಪೂರ್ವ ಕಾಲೇಜು, ದೊಮ್ಮಸಂದ್ರ, ಬೆಂ-ದ. | |
| 3 | ಸರ್ಕಾರಿ ಪದವಿ ಪೂರ್ವ ಕಾಲೇಜು, ಯಡಿಯೂರು, ಬೆಂ-ದ. | ಪದ್ಮನಾಭನಗರ |
| 4 | ಸರ್ಕಾರಿ ಪದವಿ ಪೂರ್ವ ಕಾಲೇಜು, ಅಗರ, ಬೆಂ-ದ. | ಬೊಮ್ಮನಹಳ್ಳಿ |
| 5 | ಸರ್ಕಾರಿ ಪದವಿ ಪೂರ್ವ ಕಾಲೇಜು, ಹೂಡಿ, ಬೆಂ-ದ. | ಮಹದೇವಪುರ |
| 6 | ಸರ್ಕಾರಿ ಪದವಿ ಪೂರ್ವ ಕಾಲೇಜು, ಕಾಡುಗೋಡಿ, ಬೆಂ-ದ. | |
| 7 | ಸರ್ಕಾರಿ ಪದವಿ ಪೂರ್ವ ಕಾಲೇಜು, ವರ್ತೂರು, ಬೆಂ-ದ. | |
| 8 | ಸರ್ಕಾರಿ ಪದವಿ ಪೂರ್ವ ಕಾಲೇಜು, ಅತ್ತೀಗುಪ್ಪೆ, ಬೆಂ-ದ. | ವಿಜಯನಗರ |
| 9 | ಸರ್ಕಾರಿ ಪದವಿ ಪೂರ್ವ ಕಾಲೇಜು, ಬ್ಯಾಟರಾಯನಪುರ, ಬೆಂ-ದ. | |
| 10 | ಸರ್ಕಾರಿ ಪದವಿ ಪೂರ್ವ ಕಾಲೇಜು, ಮಡಿವಾಳ, ಬೆಂ-ದ. | ಬಿ.ಟಿ.ಎಂ ಲೇಔಟ್ |
| 11 | ಸರ್ಕಾರಿ ಪದವಿ ಪೂರ್ವ ಕಾಲೇಜು, ಆಡುಗೋಡಿ, ಬೆಂ-ದ. | |
| 12 | ಬಾಲಕಿಯರ ಸರ್ಕಾರಿ ಪದವಿ ಪೂರ್ವ ಕಾಲೇಜು, ಬಸವನಗುಡಿ, ಬೆಂ-ದ. | ಚಿಕ್ಕಪೇಟೆ |
| 13 | ಬಾಲಕಿಯರ ಸರ್ಕಾರಿ ಪದವಿ ಪೂರ್ವ ಕಾಲೇಜು, ವಾಣಿವಿಲಾಸ ಕೋಟೆ, ಬೆಂ-ದ | |
| 14 | ವಾಣಿವಿಲಾಸ ಸರ್ಕಾರಿ ಪದವಿ ಪೂರ್ವ ಕಾಲೇಜು, ವಿ,ವಿ,ಪುರಂ, ಬೆಂ-ದ | |
| 15 | ಸರ್ಕಾರಿ ಪದವಿ ಪೂರ್ವ ಕಾಲೇಜು, ದೊಮ್ಮಲೂರು, ಬೆಂ-ದ. | ಶಾಂತಿನಗರ |
| 16 | ಸರ್ಕಾರಿ ಪದವಿ ಪೂರ್ವ ಕಾಲೇಜು, ಕೆ,ಆರ್,ಪುರಂ, ಬೆಂ-ದ. | ಕೆ,ಆರ್,ಪುರಂ |
| 17 | ಸರ್ಕಾರಿ ಪದವಿ ಪೂರ್ವ ಕಾಲೇಜು, ರಾಮಮೂರ್ತಿನಗರ, ಬೆಂ-ದ | |
| 18 | ಸರ್ಕಾರಿ ಪದವಿ ಪೂರ್ವ ಕಾಲೇಜು, ಕಗ್ಗಲೀಪುರ, ಬೆಂ-ದ. | ಯಶವಂತಪುರ |
| 19 | ಸರ್ಕಾರಿ ಪದವಿ ಪೂರ್ವ ಕಾಲೇಜು, ಕೆಂಗೇರಿ, ಬೆಂ-ದ. | |
| 20 | ಸರ್ಕಾರಿ ಪದವಿ ಪೂರ್ವ ಕಾಲೇಜು, ನೂತನಕೋಟೆ, ಬೆಂ-ದ. | ಚಾಮರಾಜಪೇಟೆ |

ಜಂಟಿ ನಿರ್ದೇಶಕರು(ಆ)
ಪದವಿ ಪೂರ್ವ ಶಿಕ್ಷಣ ಇಲಾಖೆ

# ಅನುಬಂಧ – 2

## ಬೆಂಗಳೂರು ನಗರ ಜಿಲ್ಲೆಯ ವ್ಯಾಪ್ತಿಯಡಿ ಬರುವ ವಿಧಾನಸಭಾ ಕ್ಷೇತ್ರಗಳಲ್ಲಿನ ಪದವಿ ಪೂರ್ವ ಕಾಲೇಜುಗಳ ಮಾಹಿತಿ

| ಕ್ರ.ಸಂ | ಪ್ರೌಢಶಾಲೆಯ ಹೆಸರು | ವಿಧಾನಸಭಾ ಕ್ಷೇತ್ರ | ಜಿಲ್ಲೆ |
|---|---|---|---|
| 1 | ಸರಕಾರಿ ಪ್ರೌಢಶಾಲೆ, ಹೆಗ್ಗನಹಳ್ಳಿ | ದಾಸರಹಳ್ಳಿ | ಬೆಂಗಳೂರು ಉತ್ತರ |
| 2 | ಸರಕಾರಿ ಪ್ರೌಢಶಾಲೆ, ಬಾಗಲಗುಂಟೆ | | ಬೆಂಗಳೂರು ಉತ್ತರ |
| 3 | ಸರಕಾರಿ ಪ್ರೌಢಶಾಲೆ, ಅಬ್ಬಿಗೇರಿ | | ಬೆಂಗಳೂರು ಉತ್ತರ |
| 4 | ಸರಕಾರಿ ಪ್ರೌಢಶಾಲೆ, ಚಿಕ್ಕಬಾಣವಾರ | | ಬೆಂಗಳೂರು ಉತ್ತರ |
| 5 | ಸರಕಾರಿ ಪ್ರೌಢಶಾಲೆ, ಯಶವಂತಪುರ | ಮಲ್ಲೇಶ್ವರಂ | ಬೆಂಗಳೂರು ಉತ್ತರ |
| 6 | ಸರಕಾರಿ ಪ್ರೌಢಶಾಲೆ, ಚಿಕ್ಕಬೀದರಕಲ್ಲು | ಯಲಹಂಕ | ಬೆಂಗಳೂರು ಉತ್ತರ |
| 7 | ಸರಕಾರಿ ಪ್ರೌಢಶಾಲೆ, ಮಾಕಳಿ | | ಬೆಂಗಳೂರು ಉತ್ತರ |

| ಕ್ರ.ಸಂ | ಪ್ರೌಢಶಾಲೆಯ ಹೆಸರು | ವಿಧಾನಸಭಾ ಕ್ಷೇತ್ರ | ಜಿಲ್ಲೆ |
|---|---|---|---|
| 1 | ಸರಕಾರಿ ಪ್ರೌಢಶಾಲೆ, ಕೈಲಾಸಹಳ್ಳಿ | ಕೆ.ಆರ್.ಪುರಂ | ಬೆಂಗಳೂರು ದಕ್ಷಿಣ |
| 2 | ಸರಕಾರಿ ಪ್ರೌಢಶಾಲೆ, ಹೊಸ್ಕೂರು | ಬಿಟಿಎಂ ಲೇಔಟ್ | ಬೆಂಗಳೂರು ದಕ್ಷಿಣ |
| 3 | ಸರಕಾರಿ ಪ್ರೌಢಶಾಲೆ, ವನಗನಹಟ್ಟಿ | ಪದ್ಮನಾಭನಗರ | ಬೆಂಗಳೂರು ದಕ್ಷಿಣ |
| 4 | ಸರಕಾರಿ ಪ್ರೌಢಶಾಲೆ, ಸಾರಕ್ಕಿ | ಜಯನಗರ | ಬೆಂಗಳೂರು ದಕ್ಷಿಣ |
| 5 | ಸರಕಾರಿ ಪ್ರೌಢಶಾಲೆ, ಉತ್ತರಹಳ್ಳಿ | ಬೆಂಗಳೂರು ದಕ್ಷಿಣ | ಬೆಂಗಳೂರು ದಕ್ಷಿಣ |
| 6 | ಸರಕಾರಿ ಪ್ರೌಢಶಾಲೆ, ಕೆಂಗೇರಿ | ಯಶವಂತಪುರ | ಬೆಂಗಳೂರು ದಕ್ಷಿಣ |
| 7 | ಸರಕಾರಿ ಪ್ರೌಢಶಾಲೆ, ಬೇಗೂರು | ಬೊಮ್ಮನಹಳ್ಳಿ | ಬೆಂಗಳೂರು ದಕ್ಷಿಣ |
| 8 | ಸರಕಾರಿ ಪ್ರೌಢಶಾಲೆ, ಗೊಟಗೇರಿ | ಬೆಂಗಳೂರು ದಕ್ಷಿಣ | ಬೆಂಗಳೂರು ದಕ್ಷಿಣ |
| 9 | ಸರಕಾರಿ ಪ್ರೌಢಶಾಲೆ, ಪುಟ್ಟನಹಳ್ಳಿ | ಬೆಂಗಳೂರು ದಕ್ಷಿಣ | ಬೆಂಗಳೂರು ದಕ್ಷಿಣ |
| 10 | ಸರಕಾರಿ ಪ್ರೌಢಶಾಲೆ, ಹೆಬ್ಬಗೋಡಿ | ಆನೇಕಲ್ಲು | ಬೆಂಗಳೂರು ದಕ್ಷಿಣ |
| 11 | ಸರಕಾರಿ ಪ್ರೌಢಶಾಲೆ, ತಾವರಕೆರೆ | ಬಿಟಿಎಂ ಲೇಔಟ್ | ಬೆಂಗಳೂರು ದಕ್ಷಿಣ |

ಜಂಟಿ ನಿರ್ದೇಶಕರು(ಆ)
ಪದವಿ ಪೂರ್ವ ಶಿಕ್ಷಣ ಇಲಾಖೆ